ನವಶಿಕ್ಷಣ ಚಿಂತನ ಮಾಲಿಕೆ – ೧

## ಕಿರುದರ್ಪಣ

# ಏತಕ್ಕಾಗಿ ಶಿಕ್ಷಣ?

ಆಧುನಿಕ ಶಿಕ್ಷಣದ ಬುನಾದಿಯ ಬಗೆಗಿನ ಆರು ಮಿಥ್ಯೆಗಳು
ಹಾಗೂ ಅವುಗಳ ಬದಲಿಗೆ ಆರು ಹೊಸ ತತ್ವಗಳು

ಮೂಲ ಚಿಂತಕರು
ಡೇವಿಡ್ ಒರ್

ಅನುವಾದ: ಅಮರನಾಥನ್. ಎನ್

ಕರ್ನಾಟಕ ಎಜುಕೆಷನ್ ನೆಟ್ವರ್ಕ್
ವಿದ್ಯಾಶಿಲ್ಪ ಯೋಜನೆಯಡಿ ಪ್ರಕಟಿತ

# ನಮ್ಮ ನುಡಿ

ಆತ್ಮೀಯರೇ,

'ಎಲ್ಲವೂ ಇದ್ದೂ, ಏನೋ ಒಂದು ಮುಖ್ಯವಾದುದೇ ಇಲ್ಲವಲ್ಲ!' ಎಂದು ವ್ಯಥೆಯ ಭಾವನೆಗಳು ಮೂಡುವ ಸ್ಥಿತಿ ಇಂದು ಎಲ್ಲ ರಂಗಗಳಲ್ಲೂ ಎದ್ದುಕಾಣುತ್ತಿದೆ. 'ಅಭಿವೃದ್ಧಿಯ ಇಂದ್ರಲೋಕ' ಕಣ್ಣುಕುಕ್ಕಿಸುತ್ತ ಬೃಹತ್ತಾಗಿ ಬೆಳೆಯುತ್ತಲಿದೆ! ಯಾಕೆ ಹೀಗೆ? ಬಹುಶಃ, ಎಲ್ಲ ಬೆಳವಣಿಗೆ ಅಭಿವೃದ್ಧಿಗಳು ಮಾನವನ, ಅಂದರೆ ನಮ್ಮ ಬೌದ್ಧಿಕ ಕ್ರಿಯಾಶೀಲತೆಯ – ಕಸರತ್ತಿನ ಫಲ. ಇದರ ಲಕ್ಷಣವೇ ನೋಡುವವರ ಕಣ್ಣು ಕುಕ್ಕುವಂತೆ ಮಾಡುವುದೇ ಏನೋ?! ಆದರೆ ಹೃದಯ ಮನಸ್ಸು – ಪ್ರಜ್ಞೆ – ಪ್ರಜ್ಞಾವಂತಿಕೆಯನ್ನು ಗಣನೆಗೇ ತೆಗೆದುಕೊಳ್ಳದೇ ನಡೆಯುವ ಅಭಿವೃದ್ಧಿಯ ಇಂದ್ರಲೋಕ ಮನುಷ್ಯ ಜಗತ್ತನ್ನು ಮಾತ್ರವಲ್ಲ, ಇಡೀ ಭೂಮಂಡಲದ ಸಕಲ ಜೀವ ಜಗತ್ತಿಗೂ, ಪ್ರಕೃತಿಗೂ ಮಾರಕಾವಾಗಿಯೇ ಪರಿಣಮಿಸುತ್ತಿದೆ ಎಂಬುದಕ್ಕೆ ಬೆಟ್ಟದಷ್ಟು ವಿದ್ಯಮಾನಗಳು ಮಾಹಿತಿಗಳು ನಮ್ಮ ಕಣ್ಣ ಮುಂದಿವೆ.

ಇಂಥ ಹೊತ್ತಿನಲ್ಲಿ ಒಟ್ಟು ಜೀವನದ ಬಗ್ಗೆ ಸರಿಯಾಗಿ ಹೊಸದಾಗಿ ಆಲೋಚಿಸಬೇಕಾದ ತುರ್ತು ಉಂಟಾಗಿದೆ. ನಾವು ಬದುಕುತ್ತಿರುವ ರೀತಿ ಸರಿಯಿದೆಯೆ? ಎಂದು ಪುನಃ ಪುನಃ ಪ್ರಶ್ನಿಸಿಕೊಳ್ಳಬೇಕಾಗಿದೆ. ಒಂದರ್ಥದಲ್ಲಿ ಇದುವೇ ನಿಜವಾದ ಆಧ್ಯಾತ್ಮಿಕ ಪ್ರಶ್ನೆ ಎಂದು ಹೇಳಬಹುದು. ಇದನ್ನು ಸಾಧ್ಯವಾಗಿಸುವಂತಹುದನ್ನು ಮಾತ್ರ ನಾವು ಶಿಕ್ಷಣ ಎಂದು ಗುರುತಿಸಬೇಕಾದ ಅಗತ್ಯವಿದೆ. ನಿರ್ದಿಷ್ಟ ತರಗತಿ ಕಟ್ಟಡ, ನಿಗದಿತ ಪಠ್ಯಕ್ರಮ, ನಿಗದಿತ ವೇಳಾಪಟ್ಟಿ, ನಿಗದಿತ ವಿದ್ಯಾರ್ಹತೆಯುಳ್ಳ ನಿರ್ದಿಷ್ಟ ಶಿಸ್ತಿನ ಶಿಕ್ಷಕರು, ನಿಗದಿತ ಸಮವಸ್ತ್ರ, ನಿಗದಿತ ಪರೀಕ್ಷೆ, ನಿಗದಿತ ನೌಕರಿ, ಚಾಕರಿ, ಮದುವೆ, .... ಇಂಥ ಚೌಕಟ್ಟುಗಳಿಗೆ ಸೀಮಿತವಾಗಿರುವ ಬದುಕಿನ ಗುಣಮಟ್ಟಗಳ ಬಗ್ಗೆ ಹೊಸ ನೋಟದಿಂದ ಆಲೋಚಿಸಬೇಕಾದ ಸಮಯ ಬಂದಿದೆ. ಹರಿಯುವ ಚಲಿಸುವ ಗುಣವುಳ್ಳ ಬದುಕನ್ನು ನಿಂತ ನೀರಾಗಿಸಲು ಇರುವ ಕಾರಣಗಳನ್ನು ಸಂಗತಿಗಳನ್ನು ಗುರುತಿಸಿಕೊಳ್ಳುವ ಪ್ರಕ್ರಿಯೆ ನಡೆಯಬೇಕಾದ ಅಗತ್ಯವಿದೆ.

ಈ ದಿಸೆಯಲ್ಲಿ ತೀವ್ರವಾಗಿ ಶೋಧನೆ–ಬೋಧನೆ ಜಗತ್ತಿನಾದ್ಯಂತ ನಡೆದಿದೆ. ಬದುಕು ಮತ್ತು ಶಿಕ್ಷಣದ ಬಗ್ಗೆ ಹೊಸ ಆಲೋಚನೆಗೆ ತೊಡಗಿಸಲು ಪ್ರೇರಣೆ – ಸ್ಫೂರ್ತಿ ನೀಡುವ ಅಂಥ ಚಿಂತನೆಗಳನ್ನು ನಮ್ಮ ಹೃದಯ – ಬುದ್ಧಿಗೆ ಹತ್ತಿರ ಮಾಡಿಕೊಳ್ಳಬೇಕಾದ ಜರೂರು ಇದೆ. ಈ ಉದ್ದೇಶದಿಂದ ಕರ್ನಾಟಕ ಎಜುಕೇಷನ್ ನೆಟ್ವರ್ಕ್ ಮೂಲಕ ಅನುಷ್ಠಾನಗೊಳ್ಳುತ್ತಿರುವ ವಿದ್ಯಾಶಿಲ್ಪ ಯೋಜನೆಯಡಿ ಹಲವು ಲೇಖನಗಳನ್ನು ಅನುವಾದಿಸಿ 'ನವಶಿಕ್ಷಣ ಚಿಂತನ ಮಾಲಿಕೆ'ಯ ಮೂಲಕ ಕಿರುಪುಸ್ತಿಕೆ ರೂಪದಲ್ಲಿ ಪ್ರಕಟಿಸಲಾಗುತ್ತಿದೆ. ವಿವಿಧ ಚಿಂತಕರು ಪ್ರಸಕ್ತ ಪ್ರಶ್ನೆಗಳ ಕುರಿತು ನಡೆಸಿದ ಗಾಢ ಚಿಂತನೆಗಳು, ಅನುಭವಗಳು ದೊಡ್ಡ ಪುಸ್ತಿಕೆ ರೂಪದಲ್ಲೂ ಲಭ್ಯ ಇವೆ. ಅವುಗಳಿಗೆ ಪ್ರವೇಶಿಸಲು ಒಂದು ಸಿದ್ಧತೆಯಾಗಿ ಈ ಕಿರು ಪುಸ್ತಕಗಳನ್ನು ನೋಡಬಹುದು. ಯಾವುದೇ ವೃತ್ತಿ–ಉದ್ಯೋಗದಲ್ಲಿ ತೊಡಗಿಕೊಂಡಿದ್ದರೂ ಬದುಕಿನ ಬಗ್ಗೆ ಸಮಗ್ರವಾಗಿ ಆಲೋಚಿಸಬೇಕಾದ ಅಗತ್ಯವನ್ನು ಮನಗಾಣುತ್ತಿರುವ ಎಲ್ಲರೂ ಮೌಲ್ಯಗಳ ಪುನರ್ಶೋಧನೆಗೆ – ಸ್ವವಿವೇಚನೆಗೆ

ತೊಡಗಿಕೊಳ್ಳಲು ಪ್ರೇರಣೆ ಈ ಕಿರುಪುಸ್ತಿಕೆಗಳುನೀಡಲಿ ಎಂಬ ಆಶಯ ನಮ್ಮದು. ಇವುಗಳನ್ನು ಓದಿದ ಬಳಿಕ, ನಮ್ಮ ನಮ್ಮಲ್ಲಿ ಮೂಡುವ ಚಿಂತನೆಗಳನ್ನು ಕುರಿತು ಆಸಕ್ತರೊಂದಿಗೆ, ಗೆಳೆಯರೊಂದಿಗೆ, ಸಮಾನ ಮನಸ್ಕರೊಂದಿಗೆ ಚರ್ಚಿಸುವ, ಸಂವಾದ ನಡೆಸುವ ಪ್ರಕ್ರಿಯೆ ಮುಂದುವರೆಯಬೇಕು. ಇದುವೇ ಬದುಕಿಗೆ ಹೊಸಬೆಳಕನ್ನು ತಂದುಕೊಳ್ಳುವ ಅರ್ಥಪೂರ್ಣ ದಾರಿ.

ಈ ಕಿರುಹೊತ್ತಿಗೆಗಳು http://ken-samvada.in ; www.rvec.in ; www.dhwanitrust.org ಈ ಅಂತರ್ಜಾಲ ತಾಣಗಳಲ್ಲಿ ಲಭ್ಯ ಇವೆ. ಆಸಕ್ತರು ಇಲ್ಲಿಂದ ಡೌನ್‌ಲೋಡ್ ಮಾಡಿಕೊಳ್ಳಬಹುದು ಈ ತಾಣಗಳಲ್ಲಿ ಬದುಕು ಮತ್ತು ಶಿಕ್ಷಣ ಕುರಿತಂತೆ ಇನ್ನೂ ಹೆಚ್ಚಿನ ಚಿಂತನೆಗಳು, ಚರ್ಚೆಗಳು, ಸಂವಾದಗಳು ನಡೆಯುತ್ತಿವೆ. ಅವುಗಳಲ್ಲಿ ತಾವೂ ಭಾಗವಹಿಸಬಹುದು.

– ವಿದ್ಯಾಶಿಲ್ಪ ಯೋಜನೆ ಬಳಗ
ಕರ್ನಾಟಕ ಎಜುಕೇಷನ್ ನೆಟ್ವರ್ಕ್

# ಏತಕ್ಕಾಗಿ ಶಿಕ್ಷಣ?

## ಆಧುನಿಕ ಶಿಕ್ಷಣದ ಬುನಾದಿಯ ಬಗೆಗಿನ ಆರು ಮಿಥ್ಯೆಗಳು ಹಾಗೂ ಅವುಗಳ ಬದಲಿಗೆ ಆರು ಹೊಸ ತತ್ವಗಳು

ಕಲಿಕೆಯು ತನ್ನಷ್ಟಕ್ಕೆ ಹಾಗೂ ತನ್ನೊಳಗೆ ತಾನು ಒಳಿತಾಗಿದೆ ಎಂದು ನಾವು ನಂಬಿಕೊಂಡಿದ್ದೇವೆ. ಆದರೆ ಪರಿಸರ ಶಿಕ್ಷಣ ತಜ್ಞರಾದ ಡೇವಿಡ್ ಆರ್ ನಮಗೆ ನಮ್ಮ ಶಿಕ್ಷಣ ಇಲ್ಲಿಯವರೆಗೆ ಕೆಲವು ರೀತಿಗಳಲ್ಲಿ ಒಂದು ಪೆಡಂಭೂತವನ್ನು ಸೃಷ್ಟಿಸಿದೆ ಎಂಬುದನ್ನು ನೆನಪಿಗೆ ತರುತ್ತಾರೆ. ಅರ್ಕಾನ್ಸ್‌ಸ್ ಕಾಲೇಜಿನ ಘಟಿಕೋತ್ಸವವೊಂದರ ಅವರ ಪ್ರಾಸ್ತಾವಿಕ ಭಾಷಣವನ್ನು ಈ ಪ್ರಬಂಧ ಆಧರಿಸಿದೆ. ಇಂಥ ಭಾಷಣಗಳು ಕಾಲೇಜು ಶಿಕ್ಷಣದ ಅಂತಿಮ ಹಂತದಲ್ಲಲ್ಲದೆ ಪ್ರಾರಂಭಿಕ ಘಟ್ಟದಲ್ಲಿ ಮಾಡಲ್ಪಡಬೇಕು ಎನ್ನಿಸದಿರದು.

ಡೇವಿಡ್ ಆರ್ ಮೆಡೊಕ್ರೀಕ್ ಪ್ರಾಜೆಕ್ಟ್ ಎಂಬ ಪರಿಸರ ಶಿಕ್ಷಣ ಕೇಂದ್ರದ ಸ್ಥಾಪಕರು ಹಾಗೂ ಪ್ರಸ್ತುತ ಓಹಿಯೋದಲ್ಲಿರುವ ಒಬರ್ಲಿನ್ ಕಾಲೇಜಿನಲ್ಲಿ ಅಧ್ಯಾಪಕರು.

ಈ ದಿನವನ್ನು ಭೂಮಿಯ ಮೇಲಿನ ಒಂದು ಎಂದಿನಂತಿನ ದಿನ ಎಂದು ಭಾವಿಸಿದರೆ ನಾವು 116 ಚದರ ಮೈಲಿಗಳಷ್ಟು ಮಳೆಯ ಕಾಡನ್ನು ಕಳೆದುಕೊಳ್ಳುತ್ತೇವೆ, ಅಥವಾ ಪ್ರತಿಸೆಕೆಂಡಿಗೆ ಒಂದು ಎಕರೆಯಷ್ಟು. ಅಲ್ಲದೆ ಮಾನವರ ದುರಾಡಳಿತ ಹಾಗೂ ಹೆಚ್ಚುತ್ತಿರುವ ಜನಸಂಖ್ಯೆಯಿಂದಾಗಿ ಇನ್ನೊಂದು 72 ಚದರ ಮೈಲಿಗಳಷ್ಟು ಕಾಡು ಬೆಂಗಾಡಾಗಿ, ಮರುಭೂಮಿಯಾಗಿ ಪರಿವರ್ತನೆಯಾಗುತ್ತದೆ. 40 ರಿಂದ 100 ರಷ್ಟು ಜೀವಜಾತಿಗಳನ್ನು ಕಳೆದುಕೊಳ್ಳುತ್ತೇವೆ. ಈ ದಿನ ಮನುಷ್ಯ ಕುಲದ ಜನಸಂಖ್ಯೆ 250,000 ದಷ್ಟು ಜಾಸ್ತಿಯಾಗುತ್ತದೆ. ಈ ದಿನ ನಾವು ವಾತಾವರಣದೊಳಕ್ಕೆ 2,700 ಟನ್ನುಗಳಷ್ಟು ಕ್ಲೋರೋ

ಫ್ಲೂರೋ ಇಂಗಾಲಗಳನ್ನು ಹಾಗೂ 15 ಮಿಲಿಯ ಟನ್ನುಗಳಷ್ಟು ಇಂಗಾಲ (ಕಾರ್ಬನ್) ವನ್ನು ಸೇರಿಸಲಿದ್ದೇವೆ. ಈ ರಾತ್ರಿ ಭೂಮಿಯು ತುಸು ಹೆಚ್ಚು ಬಿಸಿಯಾಗಲಿದೆ, ಅದರ ಮೇಲೆ ಹರಿವ ನೀರು ಇನ್ನಷ್ಟು ಆಮ್ಲಮಯವಾಗಲಿದೆ ಹಾಗೂ ಜೀವಜಾಲ ಇನ್ನಷ್ಟು ಜಾಳುಜಾಳಾಗಲಿದೆ.

ನಿಮ್ಮ ಭವಿಷ್ಯದ ಆರೋಗ್ಯ ಮತ್ತು ಸುಖ–ಸಮೃದ್ಧಿಗಳು ಯಾವೆಲ್ಲ ವಸ್ತು–ವಿಷಯಗಳನ್ನು ಅವಲಂಬಿಸಿದೆಯೋ ಅವೆಲ್ಲ ಘೋರ ಅಪಾಯದ ಅಂಚಿನಲ್ಲಿವೆ: ಅವುಗಳೆಂದರೆ ಹವಾಮಾನದ ಸ್ಥಿರತೆ, ಪ್ರಾಕೃತಿಕ ವ್ಯವಸ್ಥೆಗಳ ಸ್ಥಿತಿಸಾಪಕತ್ವ ಮತ್ತು ಉತ್ಪಾದಕತೆಗಳು, ಪ್ರಕೃತಿಯ ಸಹಜ ಚೆಲುವು ಮತ್ತು ಜೈವಿಕ ವೈವಿಧ್ಯತೆಗಳು.

ಈ ವಿನಾಶಕ್ಕೆ ಕಾರಣರಾಗುತ್ತಿರುವವರು ಅಜ್ಞರಲ್ಲ; ಬಿ.ಎ., ಬಿ.ಎಸ್., ಎಲ್.ಎಲ್.ಬಿ. ಎಂ.ಬಿ.ಎ. ಮತ್ತು ಪಿ.ಎಚ್‌ಡಿ ಪದವೀಧರರೆನ್ನಿಸಿಕೊಂಡವರು. ಎಲಿ ಮೀಸೆಲ್ ಎಂಬುವರು ಮಾಸ್ಕೋದಲ್ಲಿ ಸಭೆ ಸೇರಿದ್ದ ಗ್ಲೋಬಲ್ ಫೋರಂಅನ್ನು ಉದ್ದೇಶಿಸಿ ಹೋದ ವರ್ಷ ಇದೇ ಮಾತನ್ನು ಹೇಳಿದ್ದರು, ಪ್ರಳಯದ (ಸರ್ವನಾಶ) ರೂವಾರಿಗಳು ಕ್ಯಾಂಟ್ ಮತ್ತು ಗೇಥೆಯಂಥ ಮಹಾನ್ ಚಿಂತಕರ ಪರಂಪರೆಯ ವಾರಸುದಾರರೇ ಆಗಿದ್ದಾರೆ ಎಂದು. ಅನೇಕ ಅಂಶಗಳಲ್ಲಿ ಜರ್ಮನರು ಪ್ರಪಂಚದಲ್ಲೇ ಅತ್ಯಂತ ಸುಶಿಕ್ಷಿತ ಜನಾಂಗವಾಗಿದ್ದಾರೆ; ಆದರೆ ಅವರ ಶಿಕ್ಷಣ ಅಮಾನುಷತೆ ಅನಾಗರಿಕತೆಯಿಂದ ಅವರನ್ನು ದೂರವಿಡಲು ಸಶಕ್ತವಾಗಲಿಲ್ಲ. ಹಾಗಿದ್ದರೆ ಅವರ ಶಿಕ್ಷಣದಲ್ಲಿ ಇದ್ದ ಕೊರತೆ ಏನು? ವೀಸೆಲ್‌ರ ಮಾತುಗಳಲ್ಲಿ ಹೇಳಬೇಕೆಂದರೆ: "ಆ ಶಿಕ್ಷಣ ಕ್ರಮ ಮೌಲ್ಯಗಳಿಗಿಂತ ಸಿದ್ಧಾಂತಗಳಿಗೆ, ಮನುಷ್ಯರಿಗಿಂತ ಕಲ್ಪನೆಗಳಿಗೆ, ಪ್ರಜ್ಞೆಗಿಂತ ಅಮೂರ್ತತೆಗೆ, ಪ್ರಶ್ನೆಗಳಿಗಿಂತ ಉತ್ತರಗಳಿಗೆ, ಮನ:ಸಾಕ್ಷಿ (ಅಂತ:ಪ್ರಜ್ಞೆ) ಗಿಂತ ವಿಚಾರ ಪ್ರಣಾಲಿ ಮತ್ತು ಸಾಮರ್ಥ್ಯಕ್ಕೆ ಹೆಚ್ಚು ಒತ್ತು ನೀಡಿದೆ".

ಇದನ್ನೇ, ನಮ್ಮ ಶಿಕ್ಷಣ ಪ್ರಾಕೃತಿಕ ಜಗತ್ತಿನ ಬಗ್ಗೆ ನಮ್ಮ ಚಿಂತನೆಯನ್ನು ರೂಪಿಸಿರುವ ರೀತಿಯ ಬಗೆಗೂ ಹೇಳಬಹುದಾಗಿದೆ. ಭೂಗ್ರಹದ ಮೇಲೆ ಬದುಕಿದ್ದಷ್ಟು ಕಾಲ ಅದನ್ನು ಶೋಷಿಸದೆ ಉಳಿಸಿ – ಬೆಳೆಸಿಕೊಂಡು ಬಂದವರು ಓದು ಬಾರದ ಜನರೇ ಹೊರತು ಓದನ್ನು ಅಂಧವಾಗಿ ಅನುಸರಿಸಿಕೊಂಡು ಬಂದವರಲ್ಲ ಎಂಬುದು ಸಣ್ಣಸಂಗತಿಯಲ್ಲ. ಇಲ್ಲಿ ನಾನು ಪ್ರತಿಪಾದಿಸುವ ಸರಳ ಅಂಶವೆಂದರೆ ಶಿಕ್ಷಣ ಸನ್ನಡತೆ, ಘನತೆ ಇಲ್ಲವೇ ವಿವೇಕಗಳನ್ನು ಉಂಟುಮಾಡೀತು ಎಂಬ ಖಾತ್ರಿಯಿಲ್ಲ ಎನ್ನುವುದು. ಇದೇ ಸ್ವರೂಪದ ಹೆಚ್ಚು ಪ್ರಮಾಣದ ಶಿಕ್ಷಣ ನಮ್ಮ ಸಮಸ್ಯೆಗಳನ್ನು ಇನ್ನಷ್ಟು ಬಿಗಡಾಯಿಸಬಲ್ಲದು. ಈ ವಾದ ಅಜ್ಞಾನದ ಫಲವಾಗಿ ಮೂಡಿದ್ದಲ್ಲ; ಆದರೆ ಶಿಕ್ಷಣದ ಮೌಲ್ಯವನ್ನು ಮನುಷ್ಯರ ನಡತೆಯ ಘನತೆ ಹಾಗೂ ಮಾನವ ಕುಲದ ಉಳಿವುಗಳ ಒರೆಗೆ ಹಚ್ಚಿ ನೋಡಬೇಕಾದ ಕಾಲ ಬಂದೊದಗಿದೆ ಎಂದು ಹೇಳುವುದಾಗಿದೆ. ನಮ್ಮನ್ನು ಉಳಿಸುವುದು ಶಿಕ್ಷಣವಲ್ಲ, ಆದರೆ ಒಂದು ನಿರ್ದಿಷ್ಟ ರೀತಿಯದ್ದು ಆಗಿದೆ.

## ವಿವೇಕದ ಹಾದಿ, ಅವಿವೇಕದ ಗುರಿ

ಸಮಕಾಲೀನ ಶಿಕ್ಷಣ ಹಾಗೂ ಸಂಸ್ಕೃತಿ ಹಾದಿತಪ್ಪಿದ್ದು ಎಲ್ಲಿ? ಸಾಹಿತ್ಯದಲ್ಲಿ ಒಂದು ಒಳನೋಟ ದೊರೆಯುತ್ತದೆ! ತನ್ನ ಆತ್ಮವನ್ನು ಅಂತರಂಗವನ್ನು ಜ್ಞಾನ ಬಲ ಮತ್ತು ಅಧಿಕಾರಕ್ಕಾಗಿ ಮಾರಿಕೊಳ್ಳುವ ಕ್ರಿಸ್ಟಫರ್ ಮಾರ್ಲೋನ ಫೌಸ್ಟ್, ತನ್ನ ಸೃಷ್ಟಿಗೆ ತಾನೇ ಜವಾಬ್ದಾರನಾಗಲೊಲ್ಲದ ಮೇರಿ ಶೆಲಿಯ ಡಾ. ಫ್ರ್ಯಾಂಕನ್‌ಸ್ಟೈನ್, "ನನ್ನೆಲ್ಲ ಹಾದಿಗಳೂ ವಿವೇಕಯುತವಾದುವೇ, ಆದರೆ ನನ್ನ ಧ್ಯೇಯ-ಗುರಿಗಳೆಲ್ಲ ಅವಿವೇಕದವು" ಎಂದು ಉದ್ಗರಿಸಿದ ಹರ್ಮನ್ ಮೆಲ್ವಿಲ್‌ನ ಕ್ಯಾಪ್ಟನ್ ಆಹಬ್, ಈ ಎಲ್ಲ ಪಾತ್ರಗಳೂ ಪ್ರಕೃತಿಯ ಮೇಲೆ ಯಜಮಾನಿಕೆಯನ್ನು ಸಾಧಿಸುವ ಆಧುನಿಕ ಪ್ರವೃತ್ತಿಯನ್ನು ಪ್ರತಿನಿಧಿಸುತ್ತವೆ.

ಸಮಕಾಲೀನವಾಗಿ ಅಪಾರ ಕೆಡುಕಿಗೆ ಕಾರಣವಾಗಿರುವ ಸರ್ಕಾರ, ಉದ್ಯಮ ಹಾಗೂ ಮಾಹಿತಿಜ್ಞಾನಗಳ ನಡುವಣ ಒಪ್ಪಂದದ ಮುನ್ಸೂಚನೆಯನ್ನು ಐತಿಹಾಸಿಕವಾಗಿ ಫ್ರಾನ್ಸಿಸ್ ಬೇಕನ್ ಪ್ರತಿಪಾದಿಸಿದ ಜ್ಞಾನಬಲ ಹಾಗೂ ಅಧಿಕಾರಬಲದ ಸಂಗಮದಲ್ಲಿ ಕಾಣಬಹುದು. ವಿಶ್ಲೇಷಣಾತ್ಮಕ ಮನಸ್ಸು ಸೃಷ್ಟಿಶೀಲತೆ, ನವಿರುಹಾಸ್ಯ ಮತ್ತು ಪೂರ್ಣತೆಗಳ ಅಂಶಗಳ ಮೇಲೆ ಸಾಧಿಸಿರುವ ಪ್ರಭುತ್ವದ ಮುನ್ಸೂಚನೆಯನ್ನು ಗೆಲಿಲಿಯೊನ ಬೌದ್ಧಿಕತೆಯ ಸಿದ್ಧಾಂತದಲ್ಲಿ ಗುರುತಿಸಬಹುದು. ಡೆಸ್ಕಾರ್ಟೆಸ್‌ನ ವಸ್ತುವಿಷಯ ಜ್ಞಾನದಲ್ಲಿ ಜ್ಞಾತೃ ಹಾಗೂ ಜ್ಞೇಯಗಳ ಮೂಲಭೂತ ವಿಭಜನೆ ಅಥವಾ ತಾನು ಹಾಗೂ ತನ್ನ ಗುರಿ-ಲಕ್ಷ್ಯಗಳು ಸಂಪೂರ್ಣ ಬೇರೆಬೇರೆಯಾದವು ಎಂಬ ಕಲ್ಪನೆಯ ಮುನ್ಸೂಚನೆ ಕಾಣಸಿಗುತ್ತದೆ. ಈ ಮೂವರೂ ಒಟ್ಟಿಗೆ ಆಧುನಿಕ ಶಿಕ್ಷಣದ ಬುನಾದಿಯನ್ನು ಹಾಕಿದವರು; ಈ ಬುನಾದಿಯು ನಾವು ಉಸಿರೆತ್ತದೆ ಒಪ್ಪಿಕೊಂಡಿರುವ ಆರು ಮಿಥ್ಯೆಗಳನ್ನು ಒಳಗೊಂಡಿದೆ; ಅವುಗಳನ್ನು ಈ ಕೆಳಗಿನಂತೆ ವಿವರಿಸಬಹುದು.

ಮೊದಲನೆಯದು, ಅಜ್ಞಾನವನ್ನು ಪರಿಹರಿಸಬಹುದಾಗಿದೆ ಎಂಬ ಮಿಥ್ಯೆ. ಅಜ್ಞಾನವನ್ನು ಪರಿಹರಿಸಲಾಗದು ಬದಲಾಗಿ ಅದು ಮಾನವನಿಗೆ ಅನಿವಾರ್ಯವಾದ ಒಂದು ಸ್ಥಿತಿ. ಜ್ಞಾನ ಬೆಳೆದಂತೆಲ್ಲ, ಅತ್ಯಾಧುನಿಕವಾದಂತೆಲ್ಲ ಅಜ್ಞಾನದ ಬೆಳವಣಿಗೆಯೂ ಯಾವುದಾದರೊಂದು ರೂಪದಲ್ಲಿ ಆಗಿಯೇ ತೀರುತ್ತದೆ. 1930ರಲ್ಲಿ ಥಾಮಸ್ ಮಿಡ್ಗೆಲಿ ಜೂನಿಯರ್ ಕ್ಲೋರೋ ಫ್ಲೋರೋ ಕಾರ್ಬನ್ (ಅಈಅ)ಗಳನ್ನು ಕಂಡುಹಿಡಿದಾಗ, ಅದುವರೆಗೆ ಮಾನವ ಅಜ್ಞಾನದ ಯಃಕಶ್ಚಿತ್ ಭಾಗವೊಂದಾಗಿದ್ದ ಅಂಶವೊಂದು, ಜೈವಿಕವಲಯದ ಬಗೆಗಿನ ಮಾನವ ಜ್ಞಾನದಲ್ಲಿನ ಅತ್ಯಂತ ಗಂಭೀರ ಸ್ವರೂಪದ ಮತ್ತು ಜೀವಕ್ಕೆ ಕುತ್ತು ತರುವ ಕೊರತೆಯಾಗಿ ಪರಿಣಮಿಸಿತು. 1970ರ ದಶಕದ ಆದಿಯತನಕ "ಈ ವಸ್ತು (ಅಈಅ) ಯಾವುದರ ಮೇಲೆ ಎಂಥ ಪರಿಣಾಮ ಬೀರೀತು?" ಎಂದು ಯಾರೂ ಕೇಳುವ ಸ್ಥಿತಿಯಲ್ಲಿರಲಿಲ್ಲ! ಬಳಿಕ 1190ರ ವೇಳೆಗೆ ಸಿಎಫ್‌ಸಿಗಳು (ಅಈಅ) ಜಗತ್ತಿನಾದ್ಯಂತ ಓಝೋನ್ ಪರದೆಯನ್ನು ತೆಳ್ಳಗಾಗಿಸುವುದರಲ್ಲಿ ಯಶಸ್ವಿಯಾಗಿದ್ದವು. ಹೀಗೆ ಸಿಎಫ್‌ಸಿಗಳ ಅನ್ವೇಷಣೆಯಿಂದ ಜ್ಞಾನ ಬೆಳೆಯಿತು; ವಿಸ್ತರಿಸುತ್ತಿರುವ ವೃತ್ತದ ಪರಿಧಿಯಂತೆ ಅಜ್ಞಾನವೂ ಅದರೊಟ್ಟಿಗೆ ಬೆಳೆಯಿತು.

ಎರಡನೆಯ ಮಿಥ್ಯೆಯೆಂದರೆ ನಮಗಿರುವ ಜ್ಞಾನ ಹಾಗೂ ತಂತ್ರಜ್ಞಾನದಿಂದ

ಭೂಗ್ರಹವನ್ನು ನಾವು ನಿರ್ವಹಿಸಬಲ್ಲೆವು ಎಂಬುದು. "ಭೂಮಿಯ ನಿರ್ವಹಣೆ" ಎಂಬುದಕ್ಕೆ ಸೊಗಸಾದ ಪರಿವೇಷವೊಂದು ನಿರ್ಮಾಣವಾಗಿದೆ. ಅದು ಡಿಜಿಟಲ್ ಓದುವಿಕೆ, ಕಂಪ್ಯೂಟರ್‌ಗಳು, ವಿದ್ಯುನ್ಮಾನ ಗುಂಡಿಗಳು ಹಾಗೂ ಫಲಕಗಳೊಂದಿಗೆ ನಮಗೆ ಅದ್ಭುತವಾಗಿ ಕಾಣಿಸುತ್ತದೆ. ಆದರೆ ಭೂಮಿ ಹಾಗೂ ಅದರ ವ್ಯವಸ್ಥೆಗಳು ಎಷ್ಟು ಸಂಕೀರ್ಣವಾಗಿವೆಯೆಂದರೆ ಅವನ್ನು ಎಂದೂ ಸುರಕ್ಷಿತವಾಗಿ ನಿರ್ವಹಿಸಲಾಗದು. ಮಣ್ಣಿನ ಮೇಲ್ಮೈಯ ಅತಿಮೇಲಿನ ಪದರದ ಗುಣಲಕ್ಷಣಗಳು ಇಂದಿಗೂ ಬಹಳಮಟ್ಟಿಗೆ ಅಜ್ಞಾತವಾಗಿವೆ; ಜೈವಿಕವಲಯದ ಬೃಹತ್ ಸಂರಚನೆಗಳೊಂದಿಗೆ ಇರುವ ಅದರ ಸಂಬಂಧವೂ ಸಹ.

ಆದ್ದರಿಂದ ನಮಗೆ ನಿರ್ವಹಿಸಲು ಸಾಧ್ಯವಾಗುವುದು ನಮ್ಮನ್ನೇ: ಮಾನವ ಆಕಾಂಕ್ಷೆಗಳು, ಆರ್ಥಿಕತೆ, ರಾಜನೀತಿ ಹಾಗೂ ಸಮುದಾಯಗಳು. ಆದರೆ ನಮ್ಮ ಲಕ್ಷ್ಯವೆಲ್ಲ ರಾಜಕಾರಣ, ನೈತಿಕತೆ ಹಾಗೂ ವ್ಯವಹಾರ ಜ್ಞಾನಗಳು ಒಡ್ಡುವ ಕಠಿಣ ಆಯ್ಕೆಗಳನ್ನು ತಪ್ಪಿಸಿಕೊಳ್ಳಲು ಸಹಾಯಕವಾಗುವ ವಿಷಯಗಳತ್ತ ಹೊರಳಿದೆ. ಆದರೆ ಮಿತಸಂಪನ್ಮೂಲಗಳಿರುವ ಭೂಮಿಗೆ ನಾವು ಹೊಂದಿಕೊಳ್ಳುವುದರಲ್ಲಿ ವಿವೇಕವಿದೆಯೇ ಹೊರತು ನಮ್ಮ ಅಪರಿಮಿತ ಬಯಕೆಗಳಿಗೆ ಭೂಮಿಯನ್ನು ಹೊಂದುವಂತೆ ಮಾಡುವುದರಲ್ಲಲ್ಲ.

ಮೂರನೆಯ ಮಿಥ್ಯೆ ಮಾಹಿತಿ ಜ್ಞಾನ ಬೆಳೆಯುತ್ತಿದೆ ಹಾಗೂ ಅದರ ಫಲವಾಗಿ ಮಾನವ ಸನ್ನಡತೆ, ಸದಸದ್ವಿವೇಕಗಳೂ ಕೂಡ ಎನ್ನುವುದು. ಮಾಹಿತಿ ಸ್ಫೋಟ ಸಂಭವಿಸುತ್ತಿದೆ, ಅದರ ಪರಿಣಾಮವಾಗಿ ಮಾಹಿತಿ, ಪದಗಳು ಹಾಗೂ ಗ್ರಂಥಗಳು, ಅಪಾರ ವೇಗದಲ್ಲಿ ಬೆಳೆಯುತ್ತಿವೆ. ಆದರೆ ಈ ಸ್ಫೋಟವನ್ನು ನಿಜವಾದ ಜ್ಞಾನ ಹಾಗೂ ವಿವೇಕಗಳ ಬೆಳವಣಿಗೆ ಎಂದು ಗ್ರಹಿಸುವುದು ತಪ್ಪಾಗುತ್ತದೆ, ಏಕೆಂದರೆ ಅವನ್ನು ಅಷ್ಟು ಸುಲಭವಾಗಿ ಅಳೆಯಲಾಗದು. ಒಂದು ರೀತಿಯ ಜ್ಞಾನವೇನೋ ಬೆಳೆಯುತ್ತಿದೆ ಆದರೆ ಅದೇ ವೇಳೆಗೆ ಇತರ ಪ್ರಕಾರಗಳ ಜ್ಞಾನಶಾಖೆಗಳು ನಶಿಸುತ್ತಿವೆ. ಸಿಸ್ಟಮ್ಯಾಟಿಕ್ಸ್, ವರ್ಗೀಕರಣಶಾಸ್ತ್ರ, ಪಕ್ಷಿಶಾಸ್ತ್ರ, ಇತ್ಯಾದಿ ವಿಷಯಗಳಲ್ಲಿ ಅಧ್ಯಾಪಕರ ನೇಮಕವನ್ನು ಜೀವಶಾಸ್ತ್ರ ವಿಭಾಗಗಳು ನಿಲ್ಲಿಸಿವೆಯೆಂದು ಡೇವಿಡ್ ಎಹ್ರೆನ್‌ಫೆಲ್ಡ್ ಎತ್ತಿ ಹೇಳಿದ್ದಾರೆ. ಇತ್ತೀಚಿಗೆ ಮಾಲಿಕ್ಯುಲರ್ ಬಯಾಲಜಿ (ಕಣಾತ್ಮಕ ಜೀವಶಾಸ್ತ್ರ) ಹಾಗೂ ಜೆನಿಟಿಕ್ ಎಂಜಿನಿಯರಿಂಗ್ (ತಳಿಶಾಸ್ತ್ರ)ಗಳಿಗೆ ಹೆಚ್ಚು ಒತ್ತು ನೀಡಲಾಗುತ್ತಿದೆ; ಏಕೆಂದರೆ ಅವು ಲಾಭದಾಯಕವೂ ಆಗಿವೆ; ಆದ್ದರಿಂದ ಪ್ರಾಮುಖ್ಯವಾದ ಜ್ಞಾನ ನಶಿಸಿಹೋಗುತ್ತಿದೆ. ಅರ್ಧಶತಕದ ಹಿಂದೆ ಆಲ್ಡೊ ಲಿಯೊಪಾಲ್ಡ್ ಕರೆ ನೀಡಿದ ಭೂಮಿಯ ಸ್ವಾಸ್ಥ್ಯವಿಜ್ಞಾನದ ಬೆಳವಣಿಗೆಯಲ್ಲಿ ನಾವಿನ್ನೂ ಹಿಂದಿದ್ದೇವೆ.

ನಾವು ಕೇವಲ ಕೆಲವು ವಲಯಗಳಲ್ಲಿನ ಜ್ಞಾನವನ್ನು ಮಾತ್ರ ಕಳೆದುಕೊಳ್ಳುತ್ತಿಲ್ಲ, ಸ್ಥಳೀಯ (ಜಾನಪದೀಯ) ಜ್ಞಾನ ಭಂಡಾರವನ್ನೇ ಕಳೆದುಕೊಳ್ಳುತ್ತಿದ್ದೇವೆ; ಅಂದರೆ ಜನರಿಗೆ ತಮ್ಮ ಸ್ಥಳಗಳ ಬಗ್ಗೆ ಇರಬಹುದಾದ ಜ್ಞಾನಭಂಡಾರ. ಇದನ್ನು ಬ್ಯಾರಿ ಲೊಪೆಜ್‌ನ ಮಾತುಗಳಲ್ಲಿ ಹೀಗೆ ಹೇಳಬಹುದು: "ವಿಚಿತ್ರವಾದ್ದೊಂದು, ಅದು ಅಷ್ಟು ಅಪಾಯಕಾರಿಯಲ್ಲದಿದ್ದರೂ ಸಂಭವಿಸುತ್ತಿದೆಯೆಂದು ನನಗೆ ಬಲವಾಗಿ ಅನ್ನಿಸುತ್ತಿದೆ;

ವರ್ಷದಿಂದ ವರ್ಷಕ್ಕೆ ಸ್ವಕೀಯವಾದ ಅನುಭವ ಹೊಂದಿರುವ ಜನರ ಸಂಖ್ಯೆ ಕ್ಷೀಣಿಸುತ್ತಿದೆ. ಹಳ್ಳಿಗರು ನಗರಗಳತ್ತ ಪಲಾಯನ ಮಾಡುವುದು ಮುಂದುವರಿದಿದೆ ವೈಯಕ್ತಿಕವಾದ ಮತ್ತು ಸ್ಥಳೀಯವಾದ ಜ್ಞಾನಭಂಡಾರ ಎಂದರೆ ನೈಜವಾಗಿ ಭೌಗೋಳಿಕವಾದದ್ದು ಹಾಗೂ ಯಾವುದರ ಮೇಲೆ ದೇಶವೊಂದು ಕೊನೆಗೆ ನಿಲ್ಲಬೇಕಾಗಿದೆಯೋ ಅದು ಕಳೆದುಹೋಗುತ್ತಿರುವುದರ ಹಿನ್ನೆಲೆಯಲ್ಲಿ ವ್ಯಾಖ್ಯಾನಿಸಲು ಕಷ್ಟಕರವಾದ, ಅಭದ್ರಗೊಳಿಸುವ ಮತ್ತು ಅಮಂಗಳಕರವಾದ್ದೊಂದು ಕಂಡುಬರುತ್ತಿದೆ.

ಜ್ಞಾನವೆಂದರೆ ಮಾಹಿತಿಯೆಂದು ತಪ್ಪಾಗಿ ಅರ್ಥೈಸಿಕೊಂಡಿರುವುದರಿಂದ, ಗೊಂದಲಗೊಂಡಿರುವುದರಿಂದ ಕಲಿಕೆಯು ನಮ್ಮನ್ನು ಉತ್ತಮ ಜನರನ್ನಾಗಿ ಮಾಡುತ್ತದೆ ಎಂದು ತಪ್ಪಾಗಿ ಕಲ್ಪಿಸಲಾಗಿದೆ. ಆದರೆ ಲಾರೆನ್ ಐಸೆಲಿ ಒಂದು ಕಡೆ ಹೇಳಿರುವ ಹಾಗೆ ಕಲಿಕೆಯೆಂಬುದಕ್ಕೆ ಕೊನೆಮೊದಲಿಲ್ಲ, ಅದು ನಮ್ಮನ್ನು ತನ್ನಷ್ಟಕ್ಕೆ ತಾನು ನೈತಿಕತೆಯುಳ್ಳ ಜನರನ್ನಾಗಿ ರೂಪಿಸಲಾರದು. ನಾವು ಇತರ ಕ್ಷೇತ್ರಗಳಲ್ಲಿ ಪ್ರಗತಿ ಸಾಧಿಸುತ್ತ ಹೋದಂತೆ ಉತ್ತಮತೆಯ ಜ್ಞಾನವೇ ಅಪಾಯಕ್ಕೆ ಗುರಿಯಾಗುತ್ತಿದೆ. ಅಂತಿಮವಾಗಿ ಈ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಹೇಳುವುದಾದರೆ ನಾವು ಭೂಮಿಯ ಮೇಲೆ ಉತ್ತಮ ರೀತಿಯಿಂದ ಬದುಕಲು ಮತ್ತು ಭೂಮಿಯನ್ನು ಶೋಷಿಸದೆ ಉಳಿಸಿ ಬೆಳೆಸಿಕೊಂಡು ಹೋಗಲು ಅತ್ಯಗತ್ಯವಾಗಿ ಬೇಕಾದ ಎಲ್ಲ ವಿಷಯಗಳಲ್ಲಿ ಹೆಚ್ಚು ಹೆಚ್ಚು ಅಜ್ಞಾನಿಗಳಾಗುತ್ತ ನಡೆದಿದ್ದೇವೆ.

ಇನ್ನು ನಾಲ್ಕನೆಯ ಮಿಥ್ಯೆ ಉನ್ನತ ಶಿಕ್ಷಣಕ್ಕೆ ಸಂಬಂಧಿಸಿದ್ದು: ನಾವು ಕಳಚಿಹಾಕಿರುವುದನ್ನು (ಉಪಭೋಗಿಸಿರುವುದನ್ನು) ಲೋಪವಿಲ್ಲದಂತೆ ಮತ್ತೆ ನಿರ್ಮಿಸಬಲ್ಲೆವು (ಮರುಪೂರಣಗೊಳಿಸಬಲ್ಲೆವು). ಆಧುನಿಕ ಪಠ್ಯಕ್ರಮದಲ್ಲಿ ನಾವು ಜಗತ್ತನ್ನು ತುಂಡು ತುಂಡಾಗಿ ಛಿದ್ರಗೊಳಿಸಿದ್ದೇವೆ; ಅದಕ್ಕೆ ಶಾಸ್ತ್ರ ಮತ್ತು ಉಪಶಾಸ್ತ್ರಗಳ ಹೆಸರು ನೀಡಿದ್ದೇವೆ. ಇದರ ಫಲವಾಗಿ 12 ಅಥವಾ 16 ಅಥವಾ 20 ವರ್ಷಗಳ ಶಿಕ್ಷಣದ ಬಳಿಕವೂ ಬಹುತೇಕ ವಿದ್ಯಾರ್ಥಿಗಳು ವಸ್ತುವಿಷಯಗಳನ್ನು ಒಂದೇ ಸೂತ್ರದಲ್ಲಿ ಬಂಧಿಸಿರುವ ಏಕತೆ ಹಾಗೂ ಪರಸ್ಪರಾವಲಂಬನೆಯ ವಿಶಾಲ – ಸಮಗ್ರ ಅರಿವೇ ಇಲ್ಲದೆ ಸ್ನಾತಕರಾಗುತ್ತಿದ್ದಾರೆ. ವೈಯಕ್ತಿಕತೆಯ ಹಾಗೂ ಭೂಮಿಯ ಕಾಳಜಿಗಳು–ಪರಿಣಾಮಗಳು ಪರಸ್ಪರ ಸ್ವತಂತ್ರವಾಗಿವೆ. ಉದಾಹರಣೆಗೆ, ಪರಿಸರ ವಿಜ್ಞಾನದ ಅಆಇಈ ತಿಳಿಯದ ಅರ್ಥಶಾಸ್ತ್ರಜ್ಞರನ್ನು ನಾವು ನಿಯತವಾಗಿ ಉತ್ಪಾದಿಸುತ್ತಿದ್ದೇವೆ. ಇದು, ನಮ್ಮ ರಾಷ್ಟ್ರೀಯ ಲೆಕ್ಕಪತ್ರ ವ್ಯವಸ್ಥೆಗಳು ಒಟ್ಟು ರಾಷ್ಟ್ರೀಯ ಉತ್ಪನ್ನ (ಉಒಕ) ದಿಂದ ಜೈವಿಕ ಫಲಕ್ಷೀಣಿಸುವಿಕೆ, ಮಣ್ಣುಸವಕಳಿ, ನೀರು ಅಥವಾ ಗಾಳಿಯಲ್ಲಿ ಸೇರಿರುವ ವಿಷಕಾರಿಗಳು, ಸಂಪನ್ಮೂಲಗಳ ಬತ್ತುವಿಕೆ ಇತ್ಯಾದಿಗಳನ್ನು ಏಕೆ ಕಳೆದುಹಾಕುತ್ತಿಲ್ಲ ಎಂಬುದಕ್ಕೆ ವಿವರಣೆ ಉತ್ತರ ನೀಡುತ್ತದೆ. ನಾವು ಬೆಳೆದ ಒಂದು ಬಳ್ಳ (ಒಂದು ಅಳತೆ) ಗೋಧಿಯ ಬೆಲೆಯನ್ನು ಉಒಕ ಗೆ ಸೇರಿಸಲು ಉತ್ಸುಕರಾಗಿರುತ್ತೇವೆ ಅದೇ ವೇಳೆಗೆ ಆ ಗೋಧಿ ಬೆಳೆಯುವಲ್ಲಿ ನಷ್ಟವಾದ ಮೂರುಬಳ್ಳ ಮಣ್ಣಿನ ಮೇಲ್ಮೈಸಾರವನ್ನು ಮರೆಯುತ್ತೇವೆ. ಇಂಥ ಅಪೂರ್ಣ ಶಿಕ್ಷಣದ ಫಲವಾಗಿ ನಾವು ಹಿಂದೆ ಇದ್ದುದಕ್ಕಿಂತ ಈಗ ಹೆಚ್ಚು ಶ್ರೀಮಂತರಾಗಿದ್ದೇವೆ ಎಂದು ನಂಬಿಕೊಂಡು

ನಮಗೆ ನಾವೇ ಮೋಸ ಹೋಗುತ್ತಿದ್ದೇವೆ.

ಐದನೆಯ ಮಿಥ್ಯೆಯೆಂದರೆ ಶಿಕ್ಷಣದ ಗುರಿ ನಮ್ಮ ಪ್ರಗತಿ ಹಾಗೂ ಯಶಸ್ಸಿನ ಮೆಟ್ಟಿಲುಗಳನ್ನು ನಿರ್ಮಿಸುವುದು ಎಂಬ ಕಲ್ಪನೆ. ಥಾಮಸ್ ಮರ್ಟನ್ ಒಂದು ಕಡೆ ಹೇಳಿರುವಂತೆ "ಇದು ಕೇವಲ ವಿಸ್ತೃತವಾದ ಹಾಗೂ ಕೃತಕವಾದ ಒಗಟು ಬಿಡಿಸುವ ಕಾರ್ಯಕ್ರಮವೊಂದರಲ್ಲಿ ಭಾಗಿಗಳಾಗಲು ನಿರ್ಮಿಸಿದ, ನಿಜವಾಗಿಯೂ ಬೇರೆ ಯಾವುದಕ್ಕೂ ಉಪಯೋಗಕ್ಕೆ ಬರದ ಜನರನ್ನು ಒಟ್ಟೊಟ್ಟಾಗಿ ಉತ್ಪಾದಿಸುವ ಪ್ರಕ್ರಿಯೆ". ತನ್ನ ಯಶಸ್ಸಿನ ಬಗ್ಗೆ ಬರೆ ಎಂದು ಕೇಳಿದಾಗ ಮರ್ಟನ್ ಹೇಳಿದ್ದು ಹೀಗೆ: "ನಾನೊಮ್ಮೆ ಆಕಸ್ಮಿಕವಾಗಿ, ಸರಿಯಾಗಿ ಗಮನಕೊಡದೆ, ಮುಗ್ಧವಾಗಿ ಒಂದು ಅತಿಹೆಚ್ಚು ಖರ್ಚಾದ ಪುಸ್ತಕ ಬರೆಯುವಂತಾಗಿದ್ದರೆ, ಮುಂದೆಂದೂ ಇಂಥ ಅಚಾತುರ್ಯ ನಡೆಯದಂತೆ ನಾನು ನೋಡಿಕೊಳ್ಳುತ್ತೇನೆ." ವಿದ್ಯಾರ್ಥಿಗಳಿಗೆ ಆತನ ಉಪದೇಶ ಹೀಗಿರುತ್ತಿತ್ತು: "ಏನಾದರೂ ಆಗಿ, ನಿಮಗೆ ಅನ್ನಿಸಿದ್ದು ಆಗಿ, ಎಲ್ಲ ರೀತಿಯ ಹುಚ್ಚರು, ಕುಡುಕರು, ಇಬ್ಬಂದಿಗಳಾಗಿ, ಆದರೆ ಒಂದನ್ನು ಮಾತ್ರ ದೂರವಿಡಿ ಅಥವಾ ಒಂದರಿಂದ ತಪ್ಪಿಸಿಕೊಳ್ಳಿ: ಅದೇ ಯಶಸ್ಸು."

ಭೂಮಿಗೆ ಹೆಚ್ಚು "ಯಶಸ್ವೀ" ಜನರ ಅಗತ್ತವಿಲ್ಲ ಎಂಬುದು ಸರಳವಾದ ವಾಸ್ತವಾಂಶ. ಆದರೆ ಅದಕ್ಕೆ ಬೇಕಿರುವುದು ಹೆಚ್ಚು ಹೆಚ್ಚಾಗಿ ಎಲ್ಲಾ ಬಗೆಯ ಶಾಂತಿದೂತರು, ಚಿಕಿತ್ಸಕರು, ಮರುಪೂರಣಗಾರರು, ಕಥೆ ಹೇಳುವವರು, ಪ್ರೇಮಿಗಳು. ತಮ್ಮ ತಮ್ಮ ಮೂಲ ತಾಣಗಳಲ್ಲೇ ನೆಮ್ಮದಿಯಿಂದ ಬದುಕಿರುವವರು ಬೇಕು. ಜಗತ್ತನ್ನು ಇನ್ನಷ್ಟು ಸಹ್ಯಗೊಳಿಸಬಲ್ಲ, ವಾಸಯೋಗ್ಯಗೊಳಿಸಬಲ್ಲ, ಮಾನವೀಯ ಗೊಳಿಸಬಲ್ಲ ಹೋರಾಟದಲ್ಲಿ ಭಾಗಿಗಳಾಗಲು ಬೇಕಾದ ನೈತಿಕಸ್ಥೈರ್ಯವುಳ್ಳ ಜನರು ಬೇಕು. ನಮ್ಮ ಸಂಸ್ಕೃತಿ ವ್ಯಾಖ್ಯಾನಿಸಿರುವ ಹಾಗೆ ಇದನ್ನೆಲ್ಲ ಸಾಧ್ಯಗೊಳಿಸಲು ಯಶಸ್ಸು ಬೇಕಾಗುವುದೇ ಇಲ್ಲ.

ಕೊನೆಯದಾಗಿ ನಮ್ಮ ಸಂಸ್ಕೃತಿ ಮಾನವ ಸಾಧನೆಯ ಔನ್ನತ್ಯವನ್ನು ಪ್ರತಿನಿಧಿಸುತ್ತದೆ ಎಂಬ ಮಿಥ್ಯೆಯೊಂದಿದೆ; ಅದರರ್ಥ ನಾವು ಮಾತ್ರ ಆಧುನಿಕರು, ತಾಂತ್ರಿಕ ಪರಿಣತಿಯುಳ್ಳವರು ಮತ್ತು ಅಭಿವೃದ್ಧಿ ಹೊಂದಿದವರು. ಇದು ನಿಜವಾಗಿ ಪ್ರತಿನಿಧಿಸುವುದು ಅತ್ಯಂತ ಕೆಳಮಟ್ಟದ ಸಾಂಸ್ಕೃತಿಕ ಸೊಕ್ಕನ್ನು ಅಲ್ಲದೆ ಇತಿಹಾಸ ಮತ್ತು ಮಾನವಿಕಶಾಸ್ತ್ರಗಳನ್ನು ಸಂಪೂರ್ಣ ತಪ್ಪಾಗಿ ಅರ್ಥೈಸಿಕೊಂಡಿರುವುದನ್ನು. ಇತ್ತೀಚಿಗೆ ಈ ದೃಷ್ಟಿಕೋನ ನಾವು ಶೀತಲಯುದ್ಧವನ್ನು ಗೆದ್ದಿದ್ದೇವೆ ಮತ್ತು ಬಂಡವಾಳಷಾಹಿವಾದ ಸಮತಾವಾದವನ್ನು ಪೂರ್ಣ ಬಗ್ಗುಬಡಿದಿದೆಯೆಂಬ ತಿಳಿವಿನ ರೂಪ ಪಡೆದಿದೆ. ಸಮತಾವಾದ ಸೋಲಲು ಕಾರಣ ಅದು ಅತಿ ಹೆಚ್ಚು ವೆಚ್ಚದಲ್ಲಿ ಅತಿ ಕಡಿಮೆ ಪ್ರಮಾಣದ ಉತ್ಪಾದನೆ ಮಾಡಿದ್ದು. ಆದರೆ ಬಂಡವಾಳವಾದವೂ ಸೋತಿದೆ ಏಕೆಂದರೆ ಅದು ಅತಿ ಹೆಚ್ಚು ಉತ್ಪಾದನೆ ಮಾಡಿದ್ದು, ಅತಿ ಕಡಿಮೆಯನ್ನು ಹಂಚಿಕೊಂಡಿದ್ದು ಮತ್ತು ನಮ್ಮ ಮಕ್ಕಳು ಮತ್ತು ಮೊಮ್ಮಕ್ಕಳಿಗೆ ಅತಿ ದುಬಾರಿಯಾಗಿ ಪರಿಣಮಿಸಿದ್ದು. ಸಮತಾವಾದ ಸೋತಿದ್ದು ತ್ಯಾಗದ ನೈತಿಕತೆಯಲ್ಲಿ; ಬಂಡವಾಳವಾದ ಸೋತಿದ್ದು ಅದು ನೈತಿಕತೆಯನ್ನೇ ನಾಶಪಡಿಸಿದ್ದರಿಂದ. ಎಷ್ಟೋ ಜನ ನಿರುತ್ಸಾಹಿ ಜಾಹೀರಾತುದಾರರು ಮತ್ತು ರಾಜಕಾರಣಿಗಳು ವರ್ಣಿಸುವಂತೆ ಇದು ಸುಖೀ

ಜಗತ್ತೇನೂ ಆಗಿಲ್ಲ.  ನಾವು ಕೆಲವೇ ಜನರಿಗಾಗಿ, ಅವರ ಸುಖಭೋಗ ಲೋಲುಪತೆಗಾಗಿಯೇ ಸೃಷ್ಟಿಯಾಗಿರುವ ಸಂಪತ್ತು ಹಾಗೂ ಬೆಳೆಯುತ್ತಿರುವ ಅತಿಕೆಳವರ್ಗದವರಿಗಾಗಿ ಕಲ್ಕತ್ತಾ ದಾರಿದ್ರ್ಯಗಳು ಒಟ್ಟಿಗೆ ಇರುವ ಜಗತ್ತೊಂದನ್ನು ನಿರ್ಮಿಸಿದ್ದೇವೆ.

ಇದು ಜನರ ಬೂಟಾಟಿಕೆಯ ಮಾತುಗಳಿಂದ ತುಂಬಿತುಳುಕುವ ರಸ್ತೆಗಳ, ಮತಿಹೀನ ಹಿಂಸಾಚಾರ ನಡೆಯುವ, ಅತಿಹತಾಶಭರಿತ ದಾರಿದ್ರ್ಯದಿಂದ ಕೂಡಿದ, ಅನೈತಿಕತೆಯಿಂದ ತುಂಬಿದ ಅತ್ಯಂತ ಕೆಳಮಟ್ಟಕ್ಕೆ ಕುಸಿದ ಜಗತ್ತು.  ವಿಚ್ಛಿದ್ರಗೊಂಡ ಸಂಸ್ಕೃತಿಯಲ್ಲಿ ನಾವು ಬದುಕುತ್ತಿದ್ದೇವೆ ಎಂಬುದು ನಿಜ.  "ಹೊಲಿಸ್ಟಿಕ್ ರಿವ್ಯೂ" ಪತ್ರಿಕೆಯ ಸಂಪಾದಕ ರಾನ್ ಮಿಲರ್ ಅವರು ಇದನ್ನು ಹೀಗೆ ವಿವರಿಸಿದ್ದಾರೆ:  "ಮಾನವ ಚೈತನ್ಯದ ಶ್ರೇಷ್ಠತೆ–ಉದಾತ್ತತೆಗಳನ್ನು ನಮ್ಮ ಸಂಸ್ಕೃತಿ ಪೋಷಿಸುವುದಿಲ್ಲ.  ಅದು ದಾರ್ಶನಿಕತೆ, ಕಲ್ಪನಾಶೀಲತೆ ಅಥವಾ ಸೌಂದರ್ಯಾರಾಧನೆ ಅಥವಾ ಆಧ್ಯಾತ್ಮಿಕ ಸಂವೇದನೆಗಳನ್ನು ರೂಢಿಸುವುದಿಲ್ಲ. ಅದು ಸಂಪನ್ನತೆ, ಔದಾರ್ಯ, ಕಾಳಜಿ ಅಥವಾ ಸಹಾನುಭೂತಿಗಳನ್ನು ಪ್ರೋತ್ಸಾಹಿಸುವುದಿಲ್ಲ. 20ನೆಯ ಶತಮಾನದ ಅಂತ್ಯದಲ್ಲಿ ಆರ್ಥಿಕ–ತಾಂತ್ರಿಕತಜ್ಞ–ರಾಜಕೀಯಾತ್ಮಕವಾದ ಜಾಗತಿಕ ದೃಷ್ಟಿಕೋನವೊಂದು ಮಾನವ ಅಂತ:ಕರಣದಲ್ಲಿ ಉದ್ಭವಿಸುವ ಪ್ರೀತಿಗೆ ಅರ್ಹವಾದದ್ದು–ಜೀವನ್ಮುಖಿಯಾದದ್ದು ಏನಿದೆಯೋ ಅದನ್ನು ರಕ್ಕಸರೂಪದಲ್ಲಿ ನಾಶಗೊಳಿಸುತ್ತ ಸಾಗಿದೆ."

**ಶಿಕ್ಷಣ ಯಾವುದಕ್ಕಾಗಿರಬೇಕು?**

ಮಾನವನ ಉಳಿವಿನ ಉದ್ದೇಶದ ಕಾರ್ಯಸೂಚಿಯ ಹಿನ್ನೆಲೆಯಲ್ಲಿ ನಾವು ಶಿಕ್ಷಣವನ್ನು ಹೇಗೆ ಮರುಚಿಂತನಕ್ಕೊಳಪಡಿಸಬಲ್ಲೆವು?  ನಾನು ಈ ಸಂಬಂಧವಾಗಿ ಆರು ತತ್ವಗಳನ್ನು ಮುಂದಿಡುತ್ತಿದ್ದೇನೆ.

ಮೊದಲನೆಯದಾಗಿ, ಎಲ್ಲ ಶಿಕ್ಷಣವೂ ಪರಿಸರ ಶಿಕ್ಷಣವೇ.  ನಾವು ಅದರಲ್ಲಿ ಯಾವುದನ್ನು ಸೇರಿಸುವೆವೋ ಅಥವಾ ತೆಗೆದುಹಾಕುವೆವೋ ಅದರ ಮುಖಾಂತರ ವಿದ್ಯಾರ್ಥಿಗಳಿಗೆ ಅವರು ಪ್ರಾಕೃತಿಕ ಜಗತ್ತಿನ ಭಾಗವಾಗಿದ್ದಾರೆ ಎಂದೋ ಅಥವಾ ಬೇರೆಯಾಗಿದ್ದಾರೆ ಎಂದೋ ಕಲಿಸುತ್ತೇವೆ.  ಉದಾಹರಣೆಗೆ ಅರ್ಥಶಾಸ್ತ್ರವನ್ನು ಕಲಿಸುವಾಗ ಥರ್ಮೋಡೈನಮಿಕ್ಸ್‌ನ ನಿಯಮಗಳನ್ನು ಅಥವಾ ಪರಿಸರ ವಿಜ್ಞಾನದ ನಿಯಮಗಳನ್ನು ಉಲ್ಲೇಖಿಸದಿದ್ದರೆ ಅದರರ್ಥ ಅರ್ಥಶಾಸ್ತ್ರಕ್ಕೂ, ಭೌತಶಾಸ್ತ್ರ ಮತ್ತು ಪರಿಸರ ವಿಜ್ಞಾನಗಳಿಗೂ ಯಾವುದೇ ಸಂಬಂಧವಿಲ್ಲ ಎಂಬ ಮೂಲಭೂತವಾಗಿ ಪ್ರಮುಖವಾದ ಪರಿಸರವೈಜ್ಞಾನಿಕ ಪಾಠವನ್ನು ಕಲಿಸಿದ ಹಾಗಾಯಿತು.  ಇದು ದೊಡ್ಡ ಪ್ರಮಾದ.  ಇದು ಇಡೀ ಪಠ್ಯಕ್ರಮಕ್ಕೇ ಅನ್ವಯಿಸುತ್ತದೆ.

ಎರಡನೆಯ ತತ್ವವೆಂದರೆ ಶಿಕ್ಷಣದ ಉದ್ದೇಶ ವಸ್ತುವಿಷಯದ ಮೇಲೆ ಸಾಧಿಸುವ / ಹೊಂದಿರುವ ಪ್ರಭುತ್ವವಲ್ಲ, ಆದರೆ ಒಬ್ಬನಿಗೆ ತನ್ನ ವ್ಯಕ್ತಿತ್ವದ ಮೇಲೆ ಇರುವ ಪ್ರಭುತ್ವ. ವಸ್ತುವಿಷಯ ಒಂದು ಉಪಕರಣವಷ್ಟೆ.  ಏನನ್ನಾದರೂ ಕೆತ್ತಲು ಚಾಣ ಮತ್ತು ಉಳಿಗಳನ್ನು ಬಳಸಿದಂತೆ ವ್ಯಕ್ತಿಯೊಬ್ಬ ಆಲೋಚನೆಗಳು ಹಾಗೂ ಜ್ಞಾನವನ್ನು ತನ್ನ ವ್ಯಕ್ತಿತ್ವವನ್ನು

ಮುನ್ನುಗ್ಗಿಸಲು ಬಳಸುತ್ತಾನೆ. ಶಿಕ್ಷಣದ ಗುರಿ ವಿದ್ಯಾರ್ಥಿಯ ಮಿದುಳಿನೊಳಕ್ಕೆ ಎಲ್ಲ ಬಗೆಯ ಅಂಕಿ–ಅಂಶಗಳು, ತಂತ್ರಗಳು, ವಿಧಾನಗಳು ಹಾಗೂ ಮಾಹಿತಿಸಂಗ್ರಹವನ್ನು ತುಂಬುವುದೆಂದು ತಿಳಿದುಕೊಂಡಿದ್ದೇವೆ; ಅದು ಹೇಗೆ, ಯಾವುದಕ್ಕೆ ನಮಗೆ ಉಪಯೋಗವಾದೀತೆಂಬ ಅರಿವೇ ಇಲ್ಲ.

ಮೂರನೆಯದಾಗಿ ಗಳಿಸಿದ ಜ್ಞಾನ ಅದು ಜಗತ್ತಿನಲ್ಲಿ ಸದುಪಯೋಗವಾಗುವ ಹೊಣೆಯನ್ನೂ ಹೊತ್ತುಕೊಂಡಿರುತ್ತದೆ. ಸಮಕಾಲೀನವಾಗಿ ಈ ಬಗ್ಗೆ ನಡೆದ ಸಂಶೋಧನೆ ಮೇರಿ ಶೆಲಿ ಎತ್ತಿದ ವಿಚಾರಗಳಲ್ಲಿ ಮುನ್ಸೂಚಿತವಾಗಿದೆ: ತಂತ್ರಜ್ಞಾನದ ರಕ್ಕಸ ಸ್ವರೂಪದ ಅನ್ವೇಷಣೆಗಳು ಹಾಗೂ ಅದರ ಉತ್ಪನ್ನಗಳ ಜವಾಬ್ದಾರಿಯನ್ನು ಯಾರೂ ವಹಿಸಿಕೊಳ್ಳುವುದಿಲ್ಲ ಅಥವಾ ಯಾರಾದರೂ ಜವಾಬ್ದಾರಿ ವಹಿಸಿಕೊಳ್ಳಬೇಕೆಂದು ನಿರೀಕ್ಷಿಸಬಹುದೆ? ಲವ್ ಕೆನಾಲ್, ಚರ್ನೋಬಿಲ್ ಓಝೋನ್‌ನ ನಾಶ ಇವೆಲ್ಲಕ್ಕೆ ಯಾರು ಜವಾಬ್ದಾರರು? ಇವೆಲ್ಲ ದುರಂತಗಳಿಗೆ ಕಾರಣ ಜವಾಬ್ದಾರಿ ರಹಿತ ಜ್ಞಾನಸೃಷ್ಟಿ. ಇಲ್ಲಿ ನಮಗೆ ಪ್ರಮಾಣದ ಕಲ್ಪನೆಯಿಲ್ಲ; ಭಾರೀ ಮತ್ತು ಗಂಡಾಂತರಕಾರೀ ಕಾರ್ಯಾಚರಣೆಗಳನ್ನು ನಡೆಸುವ ಕ್ಷಮತೆ ಮತ್ತು ಜ್ಞಾನಗಳು ಅವುಗಳನ್ನು ಜವಾಬ್ದಾರಿಯಿಂದ ಬಳಸುವ ಸಾಮರ್ಥ್ಯಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿವೆ. ಇವುಗಳಲ್ಲಿ ಕೆಲವನ್ನು ಹೊಣೆಗಾರಿಕೆಯಿಂದ, ಸುರಕ್ಷಿತವಾಗಿ, ಸತತವಾಗಿ ಒಳ್ಳೆಯ ಉದ್ದೇಶಗಳಿಗೆ ಬಳಸಲು ಅಸಾಧ್ಯವಾಗಿದೆ.

ನಾಲ್ಕನೆಯದಾಗಿ, ಈ ಜ್ಞಾನವು ಜನರು ಹಾಗೂ ಸಮುದಾಯಗಳ ಮೇಲೆ ವಾಸ್ತವಿಕವಾಗಿ ಯಾವ ಪರಿಣಾಮಗಳನ್ನು ಬೀರುತ್ತವೆ ಎಂಬುದರ ಅರಿವಿಲ್ಲದೆ ನಾವು ಏನನ್ನಾದರೂ ಅರಿತಿದ್ದೇವೆ ಎಂದು ಹೇಳಲಾಗದು. ನಾನು ಬೆಳೆದದ್ದು ಓಹಿಯೋ ಪ್ರಾಂತ್ಯದ ಯಂಗ್‌ಸ್ಟೌನ್ ಎಂಬಲ್ಲಿ; ಈ ಸ್ಥಳದ ಆರ್ಥಿಕತೆಯಲ್ಲಿ ಬಂಡವಾಳ ವೆಚ್ಚಗಳನ್ನು ತಗ್ಗಿಸುವ ಉದ್ಯಮಕ್ಷೇತ್ರದ ನಿರ್ಧಾರಗಳಿಂದ ಯಂಗ್‌ಸ್ಟೌನ್ ಬಹಳಮಟ್ಟಿಗೆ ನಾಶವಾಯಿತು; ಇಲ್ಲಿ ಎಂಬಿಎ ಪದವೀಧರರು ತಮ್ಮ ಉದ್ಯಮಾಡಳಿತ ತಂತ್ರಗಳನ್ನು ಬಳಸಿ ದಾಳಿಕೋರ ಸೈನ್ಯವೊಂದು ಕೂಡ ಮಾಡಲಾಗದ್ದನ್ನು ಸಾಧಿಸಿದರು; ಅವರ ಉದ್ಯಮಗಳ ಮಾರಾಟ ಮತ್ತು ಕೊಳ್ಳುವಿಕೆಗಳು, ತೆರಿಗೆ ವಿನಾಯಿತಿಗಳು, ಬಂಡವಾಳ ಚಲನಶೀಲತೆ ಮುಂತಾದ ತಂತ್ರಗಳು, ಉಪಕರಣಗಳು ಈ ಕೆಲಸವನ್ನು ಸಾಧಿಸಿದ್ದವು. ನಿವ್ವಳ ಲಾಭಾಂಶದ ಹೆಸರಿನಲ್ಲಿ ಅಪಾರ ವಿನಾಯಿತಿಯನ್ನು ಪಡೆಯುತ್ತ ಅವರು ಅಮೇರಿಕದ ನಗರವೊಂದನ್ನು ಹಾಳುಗೆಡವಿದರು. ಅವರ ನಿವ್ವಳ ಲಾಭಾಂಶ ಸಿದ್ಧಾಂತದೊಳಗೆ ಇತರ ಬೆಲೆಗಳನ್ನು ಸೇರಿಸಬೇಕಾಗುತ್ತದೆ; ಅವೆಂದರೆ ನಿರುದ್ಯೋಗ, ಅಪರಾಧಗಳ ಸಂಖ್ಯೆಯಲ್ಲಿ ಏರಿಕೆ, ವಿಚ್ಛೇದನಗಳ ಪ್ರಮಾಣದಲ್ಲಿ ಏರಿಕೆ, ಕುಡಿತ, ಮಕ್ಕಳ ಶೋಷಣೆ, ಉಳಿತಾಯಗಳ ಪ್ರಮಾಣದಲ್ಲಿ ಇಳಿಕೆ ಇತ್ಯಾದಿಗಳು. ಈ ಪ್ರಕರಣದಲ್ಲಿ, ಎಂಬಿಎ ಪದವೀಧರರು ತಮ್ಮ ಉದ್ಯಮಾಡಳಿತ ತರಬೇತಿ ಸಂಸ್ಥೆಗಳಲ್ಲಿ ಕಲಿತದ್ದರಲ್ಲಿ ಒಂದು ಸಂಕುಚಿತ ಆರ್ಥಿಕ ವೈಚಾರಿಕತೆ ಜನಸಮುದಾಯಗಳ ಮೇಲೆ ಬೀರಬಹುದಾದ ಕೆಟ್ಟ ಪರಿಣಾಮಗಳ ಅರಿವು ಸೇರಿರಲಿಲ್ಲ; ಅದು ಆರ್ಥಿಕತೆಯ ಸಾಮರ್ಥ್ಯದ ಅಮೂರ್ತ ನಿರೂಪಣಗಳಿಗೆ ಜನತೆ ಮತ್ತು ಉತ್ತಮ ಸಮುದಾಯಗಳಿಗಿಂತ ಹೆಚ್ಚಿನ ಮಟ್ಟದ ಮೌಲ್ಯ ನಿರ್ಧಾರ ಮಾಡಿತ್ತು.

ಐದನೆಯದು ವಿಲಿಯಂ ಬ್ಲೇಕ್‌ನಿಂದ ಪಡೆದದ್ದು; ಅದು ಸಣ್ಣಸಣ್ಣ ವಿವರಗಳಿಗಿರುವ ಪ್ರಾಮುಖ್ಯತೆ ಮತ್ತು ಉದಾಹರಣೆಗಳು ಪದಗಳಿಗಿಂತ ಹೆಚ್ಚು ಶಕ್ತಿಯುತ ಎಂಬುದಕ್ಕೆ ಸಂಬಂಧಿಸಿದ್ದು. ವಿದ್ಯಾರ್ಥಿಗಳು ವಿಶ್ವ ಹೊಣೆಗಾರಿಕೆಯ ಬಗ್ಗೆ ಶಿಕ್ಷಣ ಸಂಸ್ಥೆಗಳಲ್ಲಿ ಕಲಿಯುವಾಗ ತಿಳಿಯುತ್ತಾರೆ; ಆದರೆ ಆ ಸಂಸ್ಥೆಗಳೋ ತಮ್ಮ ಆರ್ಥಿಕ ಶಕ್ತಿಯನ್ನು ಅತಿ ಬೇಜವಾಬ್ದಾರಿಯ ವಿಷಯಗಳಲ್ಲಿ ತೊಡಗಿಸಿರುತ್ತವೆ. ಅಲ್ಲಿ ಕಲಿಸುವ ಪಾಠಗಳು ಬೂಟಾಟಿಕೆಯದ್ದು ಮತ್ತು ಅಂತಿಮವಾಗಿ ಹತಾಶೆಯದ್ದು. ಯಾರು ಹೇಳದೆ ವಿದ್ಯಾರ್ಥಿಗಳು ಕಲಿಯುವುದು ಈ ಪಾಠವನ್ನು: ಆದರ್ಶಗಳು ಹಾಗೂ ವಾಸ್ತವತೆಯ ನಡುವಿರುವ ಭಯಾನಕ ಅಂತರವನ್ನು ತುಂಬಲು ತಾವು ಅಸಹಾಯಕರು ಎಂಬುದು. ಅತಿ ತುರ್ತಾಗಿ ಬೇಕಾಗಿರುವವರೆಂದರೆ ಪ್ರಾಮಾಣಿಕತೆಯ, ಆದರ್ಶವ್ಯಕ್ತಿಗಳಾದ ಕಾಳಜಿಪರ, ಚಿಂತನಶೀಲ ಶಿಕ್ಷಕ ಹಾಗೂ ಆಡಳಿತ ವರ್ಗ; ತಮ್ಮೆಲ್ಲ ಕಾರ್ಯಾಚರಣೆಗಳಲ್ಲಿ ಸಮಗ್ರ ಹಾಗೂ ಸಂಪೂರ್ಣವಾಗಿ ಆದರ್ಶಗಳನ್ನು ಮೂರ್ತಿವೆತ್ತಿಸಿಕೊಂಡ ಶಿಕ್ಷಣ ಸಂಸ್ಥೆಗಳು.

ಕೊನೆಯದಾಗಿ ನಾನು ಪ್ರಸ್ತಾಪಿಸುತ್ತಿರುವ ತತ್ವವೆಂದರೆ ನಿರ್ದಿಷ್ಟ ವ್ಯಾಸಂಗಗಳಲ್ಲಿ ಅಡಕವಾಗಿರುವ ವಿಷಯವಸ್ತುವಿನಷ್ಟೇ ಮುಖ್ಯವಾದದ್ದು ಕಲಿಕೆಯ ರೀತಿ ಸಹ ಎಂಬುದು. ಕಲಿಕೆಯ ಪ್ರಕ್ರಿಯೆ ಬಹಳ ಮುಖ್ಯವಾದದ್ದು. ಕೇವಲ ಉಪನ್ಯಾಸಾಧಾರಿತ ಬೋಧನೆ ನಿಷ್ಕ್ರಿಯತೆಯನ್ನುಂಟು ಮಾಡುತ್ತದೆ. ಒಳಾವರಣದಲ್ಲಿ ನಡೆಯುವ ತರಗತಿಗಳು ಕಲಿಕೆಯು ನಾಲ್ಕು ಗೋಡೆಗಳ ನಡುವೆ ಮಾತ್ರ ನಡೆಯುತ್ತದೆ ಎಂಬ ಭ್ರಮೆಯನ್ನುಂಟುಮಾಡುತ್ತವೆ; ಅಲ್ಲದೆ ಇಂಥ ಕಲಿಕೆ, ವಿದ್ಯಾರ್ಥಿಗಳು ವಿರೋಧಾಭಾಸಕರವಾಗಿ ಕರೆಯುವ "ನೈಜ ಜಗತ್ತಿನಿಂದ" ಪ್ರತ್ಯೇಕಿತವಾಗಿರುತ್ತದೆ. ಜೀವ ಶಾಸ್ತ್ರದ ತರಗತಿಗಳಲ್ಲಿ ಕಪ್ಪೆಗಳನ್ನು ಕೊಯ್ದು ಕಲಿಸುವ ಪ್ರಕೃತಿಯ ಬಗೆಗಿನ ಪಾಠಗಳನ್ನು ಮೌಖಿಕವಾಗಿ ಯಾರೂ ಹೇಳಿಕೊಳ್ಳಲಾರರು. ಕ್ಯಾಂಪಸ್‌ನ ನಿರ್ಮಿತಿ ಹರಳುಗಟ್ಟಿದ ಬೋಧನ ಪಾಂಡಿತ್ಯವಾಗಿದ್ದು ಅದು ನಿಷ್ಕ್ರಿಯತೆ, ಸ್ವನಿವೇದನೆ, ದಬ್ಬಾಳಿಕೆ ಮತ್ತು ಕೃತಕತೆಗಳನ್ನು ದೃಢಗೊಳಿಸುತ್ತದೆ. ವಿದ್ಯಾರ್ಥಿಗಳಿಗೆ ವ್ಯಾಸಂಗದ ವಿಷಯಗಳಿಗೆ ಹೊರತಾದ್ದನ್ನು ಹಲವಾರು ಸೂಕ್ಷ್ಮ ರೀತಿಗಳಲ್ಲಿ ಬೋಧಿಸಲಾಗುತ್ತಿದೆ.

## **ಕ್ಯಾಂಪಸ್‌ಗೊಂದು ನಿರ್ದೇಶ**

ಭೂಮಿಯನ್ನು ಶೋಷಿಸದೆ ಉಳಿಸಿ ಬೆಳೆಸಿಕೊಂಡು ಹೋಗಲು ನಮ್ಮನ್ನು ಶಕ್ತವನ್ನಾಗಿಸುವ ಶಿಕ್ಷಣದ ಮೌಲ್ಯವನ್ನು ನಿರ್ಧರಿಸಬೇಕಾದರೆ ಏನು ಮಾಡಬೇಕು? ನಾನು ನಾಲ್ಕು ಪ್ರಸ್ತಾವಗಳನ್ನು ಮುಂದಿಡುತ್ತಿದ್ದೇನೆ. ಮೊದಲನೆಯದಾಗಿ ನೀವು ಅಧ್ಯಾಪಕರಾಗಿ ನಿಮ್ಮ ಕೆಲಸವನ್ನು ಹೇಗೆ ನಿರ್ವಹಿಸುತ್ತೀರೆಂಬ ಬಗ್ಗೆ ಕ್ಯಾಂಪಸ್-ವ್ಯಾಪಿ ಸಂವಾದದಲ್ಲಿ ತೊಡಗಿಕೊಳ್ಳಿ. ಇಲ್ಲಿ ವಿದ್ಯಾರ್ಥಿಗಳು ಕಳೆಯುವ ನಾಲ್ಕು ವರ್ಷಗಳು ಅವರನ್ನು ಸ್ನಾತಕರನ್ನಾಗಿ ಮಾಡಿದಾಗ ಅವರು ಉತ್ತಮ ಪ್ರಜೆಗಳಾಗಿ ರೂಪುಗೊಂಡಿರುವರೋ ಅಥವಾ ವೆಂಡೆಲ್ ಬೆರಿಯ ಮಾತುಗಳಲ್ಲಿನಂತೆ "ಸಂಚಾರಿ ವೃತ್ತಿಪರ ವಿಧ್ವಂಸಕರಾಗಿಯೋ"?

ಈ ಕಾಲೇಜು ಸಂಪನ್ಮೂಲಗಳನ್ನು ಉಳಿಸಿ ಬೆಳೆಸುವ ಪ್ರಾದೇಶಿಕ ಆರ್ಥಿಕತೆಯ ಅಭಿವೃದ್ಧಿಗೆ ಕೊಡುಗೆಯನ್ನು ನೀಡುವುದೇ ಅಥವಾ ಸಾಮರ್ಥ್ಯದ ಹೆಸರಿನಲ್ಲಿ ವಿನಾಶದ ಪ್ರಕ್ರಿಯೆಗಳನ್ನು ಪೋಷಿಸುವುದೇ?

ನನ್ನ ಎರಡನೆಯ ಸಲಹೆ ಈ ಕ್ಯಾಂಪಸ್‌ಗೆ ಹರಿದುಬರುವ ಸಂಪನ್ಮೂಲಗಳನ್ನು ಪರಿಶೀಲಿಸಬೇಕೆಂಬುದು; ಅವು ಆಹಾರ, ಇಂಧನ, ನೀರು, ಸಾಮಗ್ರಿಗಳು ಹಾಗೂ ತ್ಯಾಜ್ಯ. ಶಿಕ್ಷಕ ವರ್ಗ ಮತ್ತುವಿದ್ಯಾರ್ಥಿಗಳು ಕೂಡಿ ಕ್ಯಾಂಪಸ್‌ಗೆ ಪೂರೈಕೆ ಮಾಡುವ ಬಾವಿಗಳು, ಗಣಿಗಳು, ತೋಟಗಳು, ಮೇವುದಾಣಗಳು ಮತ್ತು ಕಾಡುಗಳನ್ನು ಅಭ್ಯಸಿಸಬೇಕು; ಹಾಗೆಯೇ ನೀವು ನಿಮ್ಮ ತ್ಯಾಜ್ಯಗಳನ್ನು ಕಳುಹಿಸುವ ಕಸದ ಗುಡ್ಡೆಗಳನ್ನು. ಒಂದು ಸಮೂಹವಾಗಿ ನಿಮ್ಮ ಸಂಸ್ಥೆಯ ಕೊಳ್ಳುವ ಶಕ್ತಿಯನ್ನು ಉತ್ತಮ ಪರ್ಯಾಯಗಳನ್ನು ಬೆಂಬಲಿಸುವ ಸಲುವಾಗಿ ಅವುಗಳೆಡೆಗೆ ತಿರುಗಿಸುವ ಮಾರ್ಗಗಳನ್ನು ಶೋಧಿಸುವ ಪ್ರಕ್ರಿಯೆಯನ್ನು ಪ್ರಾರಂಭಿಸಿ; ಇಂಥ ಪರ್ಯಾಯಗಳು ಪರಿಸರಕ್ಕೆ ಮಾಡುವ ಹಾನಿ ಕಡಿಮೆಮಟ್ಟದ್ದು; ಸೂಸುವ ಇಂಗಾಲದ ಡೈ ಆಕ್ಸೈಡ್ ಪ್ರಮಾಣ ಕಡಿಮೆ; ವಿಷಕಾರಿ ವಸ್ತುಗಳ ಬಳಕೆ ತಗ್ಗೀತು; ಇಂಧನ ಕ್ಷಮತೆ ಮತ್ತು ಸೌರ ಶಕ್ತಿಯ ಬಳಕೆ ಹೆಚ್ಚುವುದು; ಪರಿಸರವನ್ನು ಉಳಿಸಿ–ಬೆಳೆಸುವ ಪ್ರಾದೇಶಿಕ ಆರ್ಥಿಕತೆಯನ್ನು ಕಟ್ಟಲು ನೆರವಾಗುವುದು; ದೀರ್ಘಕಾಲೀನ ವೆಚ್ಚಗಳನ್ನು ತಗ್ಗಿಸಿ ಇತರ ಸಂಸ್ಥೆಗಳಿಗೆ ಮಾದರಿಯಾಗುವುದು. ಈ ಅಧ್ಯಯನಗಳ ಫಲಿತಾಂಶಗಳನ್ನು ಪಠ್ಯಕ್ರಮಕ್ಕೆ ಅಂತರ್ಶಿಸ್ತೀಯ ವ್ಯಾಸಂಗಗಳು, ವಿಚಾರಗೋಷ್ಠಿಗಳು, ಉಪನ್ಯಾಸ ಮತ್ತು ಸಂಶೋಧನೆಗಳ ಮೂಲಕ ಅಳವಡಿಸಿಕೊಳ್ಳಬೇಕು. ಸಂಪನ್ಮೂಲಗಳ ಹರಿವುಗಳನ್ನು ವಿಶ್ಲೇಷಿಸುವುದು ಹೇಗೆಂದು ಅರ್ಥಮಾಡಿಕೊಳ್ಳದೆ ಮತ್ತು ನಿಜವಾದ ಸಮಸ್ಯೆಗಳಿಗೆ ನಿಜವಾದ ಪರಿಹಾರಗಳನ್ನು ಸೃಷ್ಟಿಸುವ ಪ್ರಕ್ರಿಯೆಯಲ್ಲಿ ಪಾಲ್ಗೊಳ್ಳುವ ಅವಕಾಶ ದೊರೆಯದೆ ಯಾವ ವಿದ್ಯಾರ್ಥಿಯೂ ಸ್ನಾತಕನಾಗುವಂತಿಲ್ಲ.

ಮೂರನೆಯದಾಗಿ ನಿಮ್ಮ ಹೂಡಿಕೆ ಹೇಗೆ ಕೆಲಸಮಾಡುತ್ತದೆ ಎಂಬುದನ್ನು ಮರುಪರಿಶೀಲಿಸಿ. ಅದು ಜಗತ್ತಿನಲ್ಲಿ ಜವಾಬ್ದಾರಿಯುತ ಕಾರ್ಯಗಳನ್ನು ಮಾಡುವ ಕಂಪನಿಗಳಲ್ಲಿ ಹೂಡಲ್ಪಡುತ್ತಿದೆಯೆ? ಅದರ ಕೊಂಚ ಭಾಗವನ್ನು ಸ್ಥಾನಿಕವಾಗಿ ಹೂಡುವ ಮೂಲಕ ಇಂಧನ ಕ್ಷಮತೆ ಹೆಚ್ಚಿಸುವ ಮತ್ತು ಉಳಿಸಿ ಬೆಳೆಸುವ ಆರ್ಥಿಕತೆಯನ್ನು ವಿಕಸಿಸುವ ಯತ್ನಕ್ಕೆ ತ್ವರೆ ನೀಡಬಹುದೆ?

ಅಂತಿಮವಾಗಿ, ನೀವು ನಿಮ್ಮ ಎಲ್ಲ ವಿದ್ಯಾರ್ಥಿಗಳಿಗೆ ಪರಿಸರ ಪ್ರಜ್ಞೆಯನ್ನು ಗಳಿಸುವ ಗುರಿಯನ್ನು ನಿಗದಿಪಡಿಸಬೇಕು. ಈ ಕೆಳಕಂಡ ವಿಷಯಗಳ ಒಂದು ಸಾಮಾನ್ಯ ಅರಿವು ಬೆಳೆಸಿಕೊಳ್ಳದೇ ಈ ಅಥವಾ ಯಾವುದೇ ಶಿಕ್ಷಣ ಸಂಸ್ಥೆಯಿಂದ ಯಾವ ವಿದ್ಯಾರ್ಥಿಯೂ ಪದವೀಧರನಾಗುವುದಕ್ಕೆ ಅವಕಾಶವಿಲ್ಲ.

- ಥರ್ಮೋಡೈನಮಿಕ್ಸ್‌ನ ನಿಯಮಗಳು
- ಪರಿಸರ ವಿಜ್ಞಾನದ ಮೂಲತತ್ವಗಳು
- ಸ್ವನಿರ್ವಹಣ ಸಾಮರ್ಥ್ಯ

- ಇಂಧನಶಾಸ್ತ್ರ
- ಅತಿ ಕಡಿಮೆ ವೆಚ್ಚ, ಅಂತಿಮ–ಪ್ರಯೋಜನ ವಿಶ್ಲೇಷಣೆ
- ಒಂದು ಸ್ಥಳದಲ್ಲಿ ಉತ್ತಮ ರೀತಿಯಲ್ಲಿ ಜೀವಿಸುವುದು
- ತಂತ್ರಜ್ಞಾನದ ಮಿತಿಗಳು
- ಸರಿಯಾದ ಪ್ರಮಾಣ
- ಉಳಿಸಿ–ಬೆಳಸುವ ವ್ಯವಸಾಯ ಹಾಗೂ ಅರಣ್ಯಪದ್ಧತಿಗಳು
- ಪರಿಸರ ನೈತಿಕತೆ

ಆಲ್ಡೊ ಲಿಯೊಪಾಲ್ಡ್‌ನ ಮಾತುಗಳಲ್ಲಿ ವ್ಯಕ್ತವಾಗುವ "ತಾವು ಒಂದು ಪರಿಸರಾತ್ಮಕ ಯಂತ್ರವ್ಯವಸ್ಥೆಯ ಹಲ್ಲುಗಳು ಮಾತ್ರ, ಅವರು ತಾವು ಈ ಯಂತ್ರವ್ಯವಸ್ಥೆಯ ಜೊತೆಗೆ ಕೆಲಸ ಮಾಡಿದರೆ ಮಾತ್ರ ತಮ್ಮ ಮಾನಸಿಕ ಮತ್ತು ಐಹಿಕ ಸಂಪತ್ತು ಅನಿರ್ದಿಷ್ಟ ಪ್ರಮಾಣದಲ್ಲಿ ಬೆಳೆಯುತ್ತ ಹೋಗುತ್ತದೆ, ಒಂದು ವೇಳೆ ಅವರು ಅದರೊಂದಿಗೆ ಹೆಜ್ಜೆ ಹಾಕದಿದ್ದರೆ ಅದು ಅವರನ್ನು ಧೂಳೀಪಟಮಾಡುತ್ತದೆ" ಎಂಬ ಅರಿವು ಈ ಕಾಲೇಜಿನ ವಿದ್ಯಾರ್ಥಿಗಳಿಗಿದೆಯೆ? ಲಿಯೊಪಾಲ್ಡ್ ಕೇಳುತ್ತಾರೆ: "ಇವನ್ನು ಶಿಕ್ಷಣ ನಮಗೆ ಕಲಿಸದಿದ್ದರೆ ಅಂಥ ಶಿಕ್ಷಣ ಏತಕ್ಕಾಗಿ?"

***

**ಡೇವಿಡ್ ಆರ್.........**

ಕಲಿಕೆಯು ತನ್ನಷ್ಟಕ್ಕೆ ಹಾಗೂ ತನ್ನೊಳಗೆ ತಾನು ಒಳಿತಾಗಿದೆ ಎಂದು ನಾವು ನಂಬಿಕೊಂಡಿದ್ದೇವೆ. ಆದರೆ ಪರಿಸರ ಶಿಕ್ಷಣ ತಜ್ಞರಾದ ಡೇವಿಡ್ ಆರ್ ನಮಗೆ ನಮ್ಮ ಶಿಕ್ಷಣ ಇಲ್ಲಿಯವರೆಗೆ ಕೆಲವು ರೀತಿಗಳಲ್ಲಿ ಒಂದು ಪೆಡಂಭೂತವನ್ನು ಸೃಷ್ಟಿಸಿದೆ ಎಂಬುದನ್ನು ನೆನಪಿಗೆ ತರುತ್ತಾರೆ. ಅರ್ಕಾನ್ಸ್‌ಸ್ ಕಾಲೇಜಿನ ಘಟಿಕೋತ್ಸವವೊಂದರ ಅವರ ಪ್ರಾಸ್ತಾವಿಕ ಭಾಷಣವನ್ನು ಈ ಪ್ರಬಂಧ ಆಧರಿಸಿದೆ. ಇಂಥ ಭಾಷಣಗಳು ಕಾಲೇಜು ಶಿಕ್ಷಣದ ಅಂತಿಮ ಹಂತದಲ್ಲಲ್ಲದೆ ಪ್ರಾರಂಭಿಕ ಘಟ್ಟದಲ್ಲಿ ಮಾಡಲ್ಪಡಬೇಕು ಎನ್ನಿಸದಿರದು.

ಡೇವಿಡ್ ಆರ್ ಮೆಡೊಕ್ರೀಕ್ ಪ್ರಾಜೆಕ್ಟ್ ಎಂಬ ಪರಿಸರ ಶಿಕ್ಷಣ ಕೇಂದ್ರದ ಸ್ಥಾಪಕರು ಹಾಗೂ ಪ್ರಸ್ತುತ ಓಹಿಯೋದಲ್ಲಿರುವ ಒಬರ್ಲಿನ್ ಕಾಲೇಜಿನಲ್ಲಿ ಅಧ್ಯಾಪಕರು.

**ಕರ್ನಾಟಕ ಎಜುಕೆಷನ್ ನೆಟ್ವರ್ಕ್ ಅಂಗ ಸಂಸ್ಥೆಗಳು:**

ಆರ್.ವಿ.ಇ.ಸಿ., ವಿ.ಎಸ್.ಇ.ಐ., ಧ್ವನಿ, ಸುವಿದ್ಯಾ, ದೀನಬಂಧು, ಬಿ.ಜಿ.ವಿ.ಎಸ್

**ಸಂಪರ್ಕ :**

ಕರ್ನಾಟಕ ಎಜುಕೆಷನ್ ನೆಟ್ವರ್ಕ್
ಆರ್.ವಿ.ಇ.ಸಿ
ಜಯನಗರ, 2ನೇ ಬ್ಲಾಕ್ ಬೆಂಗಳೂರು – 560011
ಫೋ: 080 – 2656 8094

**e-mail: rvecbangalore@gmail.com**

**ನೆರವು: ನವಾಜ್ ಬಾಯಿ ಟಾಟಾ ಟ್ರಸ್ಟ್ – ಮುಂಬಯಿ**